# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್:114

6ನೇ ವರ್ಷ 29ನೇ ಸಂಚಿಕೆ ಕೊಪ್ಪ 7-2-1988 ಭಾನುವಾರ ಬೆಲೆ 50 ಪೈಸೆ


## ಬಂಡಿಗಡಿಯಲ್ಲಿ ಉಚಿತ ವೈದ್ಯಕೀಯ ಶಿಬಿರ

ಬಂಡಿಗಡಿ: ಇಲ್ಲಿನ ಅಭಿನವ ಯುವಕ ಸಂಘದ ಆಶ್ರಯದಲ್ಲಿ ಜ. 24ರಂದು ಉಚಿತ ವೈದ್ಯಕೀಯ ಸೇವಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಸ್ಥಳೀಯ ಸ್ವಾತಂತ್ರ್ಯ ಯೋಧರಾದ ಬಿ. ಎಸ್. ರಾಜಪ್ಪ ಶೆಟ್ಟರು ಶಿಬಿರವನ್ನು ಉದ್ಘಾಟಿಸಿದರು. ವೈದ್ಯರುಗಳಾದ ಡಾ|| ಅನಂತ ಪದ್ಮನಾಭ, ಡಾ|| ಲಕ್ಷ್ಮೀನಾರಾಯಣ, ಡಾ|| ಬಿ. ಕೆ. ಭಗವಾನ್, ಡಾ|| ರಾಜಣ್ಣ ಡಾ|| ಕೋದಂಡ ರಾವ್ ಮತ್ತು ಡಾ|| ಶಾಲಿನಿ ಪದ್ಮನಾಭ ಶಿಬಿರದಲ್ಲಿ ಪಾಲ್ಗೊಂಡಿದ್ದರು.

ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಬಿ. ಕೆ. ರಾಜಶೇಖರ್ ವಹಿಸಿದ್ದರು. ವೈದ್ಯರಿಗೆ ಸಂಘದ ಅಧ್ಯಕ್ಷ ಎಸ್. ಎ. ಲಿಂಗಪ್ಪ ನೆನಪಿನ ಕಾಣಿಕೆ ನೀಡಿದರು.

ಬಂಡಿಗಡಿ ಹಿ. ಪ್ರಾ. ಶಾಲೆಗೆ ಹಾಲ್ಮತ್ತೂರು ಶಾಲಾ ಮುಖ್ಯೋಪಾಧ್ಯಾಯರಾದ ಕೆ. ವೆಂಕಟೇಶಯ್ಯನವರೂ, ಹಾಲ್ಮತ್ತೂರಿನ ಶಾಲೆಗೆ ಬಂಡಿಗಡಿ ಶಾಲಾ ಮುಖ್ಯೋಪಾಧ್ಯಾಯರಾದ ಸುಬ್ಬಣ್ಣ ನಾಯ್ಕರೂ ಕೊಡುಗೆಯಾಗಿ ನೀಡಿದ ಧ್ವಜಸ್ತಂಭಗಳ ಉದ್ಘಾಟನೆಯನ್ನು ಗಣರಾಜ್ಯೋತ್ಸವದಂದು ಚಾವಲ್ಮನೆ ಮಂಡಲ ಪ್ರಧಾನ ಕೆ. ಕೃಷ್ಣಪ್ಪ ನೆರವೇರಿಸಿದರು ಮತ್ತು ದಾನಿಗಳನ್ನು ಸನ್ಮಾನಿಸಲಾಯಿತು.

ಇತ್ತೀಚಿಗೆ ನಡೆದ ರಾಜ್ಯ ಮಟ್ಟದ ಕ್ರೀಡಾಕೂಟದಲ್ಲಿ ಓಟದ ಸ್ಪರ್ಧೆಯಲ್ಲಿ ಮೂರನೇ ಸ್ಥಾನ ಗಳಿಸಿದ ಸ್ಥಳೀಯ ವಿದ್ಯಾರ್ಥಿನಿ ಕು|| ಸುಬ್ಬಲಕ್ಷ್ಮಿಯನ್ನು ಅಭಿಮಾನಿ ಯುವಕ ಸಂಘದ ವತಿಯಿಂದ ನೆನಪಿನ ಕಾಣಿಕೆ ನೀಡಿ ಗೌರವಿಸಲಾಯಿತು.

(ವರದಿ: ಬಿ ಎನ್. ಭಾಸ್ಕರ್.)

# ಬಿಸಿಯೇರಿರುವ ಬಿಳಾಲುಕೊಪ್ಪ ಪರಿಸರ :
# ಕಳ್ಳ ಚಟುವಟಿಕೆಯ ಶಕ್ತಿಗಳ ಹಿನ್ನೆಲೆ ?

(ವರದಿ : ಸಿರಿಮನೆ ನಾಗರಾಜ್)

ಬಿಳಾಲ್‌ಕೊಪ್ಪ : ಹಿಂದಿನಿಂದಲೂ ಪ್ರಶಾಂತವಾಗಿದ್ದು, ಈಗ್ಗೆ ನಾಲ್ಕಾರು ವರ್ಷಗಳಿಂದಂತೂ ಹಲವು ಸಂಘ-ಸಂಸ್ಥೆಗಳ ಮೂಲಕ ಎಡೆಬಿಡದ ಸಾಂಸ್ಕೃತಿಕ ಮತ್ತು ಅಭಿವೃದ್ಧಿ ಚಟುವಟಿಕೆಗಳ ಕೇಂದ್ರವಾಗಿದ್ದ ಈ ಪ್ರದೇಶ ಈಚೆಗೆ ಸ್ವಲ್ಪ ಉದ್ವಿಗ್ನತೆಗೆ ಈಡಾಗಿದೆ.

### ಒಂದು ಸಣ್ಣ ನೆಪ

ಸಮೀಪದ ಕಾಫಿ ತೋಟವೊಂದರ ಟ್ರಾಕ್ಟರ್ ಡ್ರೈವರ್ ಮಲ್ಲಸ್ವಾಮಿ ತಾನೊಂದು ಮನೆ ಕಟ್ಟಿಕೊಳ್ಳಲು ಜಾಗ ಮಂಜೂರು ಮಾಡಿಸಿಕೊಡುವಂತೆ ಪ್ರಧಾನರನ್ನು ಕೇಳಿದಾಗ, ಯಾರಿಗೂ ತೊಂದರೆಯಾಗದಂಥ ಜಾಗದಲ್ಲಿ ಕಟ್ಟಿಕೊಂಡರೆ ಮಂಜೂರು ಮಾಡಿಸುವುದಾಗಿ ಅವರು ತಿಳಿಸಿದ್ದರು.

ಆದರೆ ಆತ ಆಯ್ಕೆ ಮಾಡಿ, ಒಡ್ಡು ಹಾಕಿದ ಜಾಗ ಬಿ.ಕೆ. ದೇವಪ್ಪಯ್ಯ, ಬಿ.ಎನ್. ಭಾಸ್ಕರ್ ಮತ್ತು ಬಳಗ ಮುಂತಾದ ಮೂರ್ನಾಲ್ಕು ಜಮೀನ್ದಾರರಿಗೆ ಕೆರೆಯ ನೀರು ಬರುವ ಆಯಕಟ್ಟಿನಲ್ಲಿ ಸುತ್ತಲೂ ಬೇರೆಯವರ ಜಮೀನು ಇರುವಂಥ ಬೆಟ್ಟ ಜಾಗವಾಗಿದ್ದು, ಒಟ್ಟು ಅರ್ಧ ಎಕ್ರೆಗಿಂತ ಹೆಚ್ಚಿರಲಿಲ್ಲ.

ಆಗಲೇ ದೇವಪ್ಪಯ್ಯ ಆತನಿಗೆ ಆ ಜಾಗದಲ್ಲಿ ಮನೆ ಕಟ್ಟಿದರೆ ತಮಗೆಲ್ಲ ನೀರಿಗೆ ತೊಂದರೆ ಬರುತ್ತದೆ, ಅವನಿಗೂ ಜಮೀನು ಮಾಡಿಕೊಳ್ಳಲು ಪ್ರಯೋಜನವಿಲ್ಲ ಎಂಬುದನ್ನು ವಿವರಿಸಿ, ಅಲ್ಲಿ ಮನೆ ಕಟ್ಟಿದರೆ ಮಾತ್ರ ತಾವು ಕೇಳಿಸಲೇಬೇಕಾಗುತ್ತದೆಂದು ಎಚ್ಚರಿಸಿದ್ದರು.

ಭಾಸ್ಕರ್ ಕೂಡ, ನೀರಿನ ಸೌಕರ್ಯವಿದ್ದು ಒಂದೆರಡು ಎಕರೆಯಾದರೂ ಇರುವ ಬೇರೆ ಒಂದೆರಡು ರೆವಿನ್ಯೂ ಜಾಗಗಳನ್ನೇ ತೋರಿಸುತ್ತೇನೆಂದೂ, ಯಾವುದನ್ನು ಆಯ್ಕೆ ಮಾಡಿಕೊಂಡರೂ ಮಂಜೂರು ಮಾಡಿಸುತ್ತೇನೆಂದೂ ಮತ್ತೊಮ್ಮೆ ಹೇಳಿದ್ದರು.

ಆದರೂ, ಆತ ರಾತೋ ರಾತ್ರಿ 'ಮನೆ'ಯ ಹಂದರವೊಂದನ್ನು ಕಟ್ಟಿಯೇಬಿಟ್ಟ. ಆಗ ಅನಿವಾರ್ಯವಾಗಿ ಭಾಸ್ಕರ್ ಮತ್ತು ಇತರರು ಮಂಡಲ ಪಂಚಾಯ್ತಿಯ ಕಾನೂನುಬದ್ಧ ಅಧಿಕಾರವನ್ನೂ, ಆ ನೀರಿಗೆ ತೆರಿಗೆ ಕೊಡುತ್ತಿರುವ ತಮ್ಮ ಹಕ್ಕನ್ನೂ ಉಪಯೋಗಿಸಿ, ಆ ಹಂದರವನ್ನು ಕಿತ್ತು ಹಾಕಿಸಿದರು.

### ಪ್ರಚೋದನೆ

ಹೀಗಾದಾಗಲೂ, ಸ್ವಭಾವತಃ ಕೆಟ್ಟವನಲ್ಲದ ಮಲ್ಲಸ್ವಾಮಿಗೆ ಕೆಲವರು ತಿಳಿ ಹೇಳಿ, ಬೇರೆ ಕಡೆ ಜಮೀನು-ಮನೆ ಮಾಡಿಕೊಳ್ಳುವ ಸಲಹೆ ನೀಡಿದ್ದರು. ಆದರೆ ರಾಜಕೀಯ ಸೇಡು, ಬೇರೆ ಪಟ್ಟಭದ್ರ ಹಿತಾಸಕ್ತಿಗಳ ಕಾರಣ ಹಲವು ಶಕ್ತಿಗಳು ಇದೇ ನೆಪವನ್ನು ಉಪಯೋಗಿಸಿಕೊಂಡು, ವೈಯುಕ್ತಿಕವಾಗಿ ಪ್ರಧಾನರನ್ನೂ, ಒಟ್ಟಾರೆಯಲ್ಲಿ ಈ ಪ್ರದೇಶವನ್ನೂ ತಮ್ಮ ಹಿಡಿತಕ್ಕೆ ಸಿಕ್ಕಿಸಿಕೊಳ್ಳಲು ವ್ಯವಸ್ಥಿತ ಜಾಲ ಹೆಣೆದು, ಪುಂಡಾಟಿಕೆ, ಗಲಭೆ-ಹೊಡೆದಾಟಗಳಲ್ಲಿ ನುರಿತ ಕೆಲವರನ್ನು ಎತ್ತಿಕಟ್ಟಿ, ಪ್ರಕ್ಷುಬ್ಧತೆ ಹುಟ್ಟು ಹಾಕಿದ್ದಾರೆಂದು ಭಾಸ್ಕರ್ ಮತ್ತು ಗ್ರಾಮಸ್ಥರು ಹೇಳುತ್ತಾರೆ.

### ಹಲ್ಲೆಗಳು

ಇದರ ಪರಿಣಾಮವಾಗಿ ತಿಮ್ಮಯ್ಯ ಎಂಬ ಹರಿಜನ ಕೃಷಿ ಕಾರ್ಮಿಕನ ಮೇಲೆ, ಇನ್ನೊಬ್ಬ ಬಡಪಾಯಿ ವ್ಯಕ್ತಿಯ ಮೇಲೆ ಹಾಗೂ ತೋಟವನುಸೆ ಲಕ್ಷ್ಮೀನಾರಾಯಣ ಎಂಬ ಜಮೀನ್ದಾರ ಯುವಕನ ಮೇಲೆ ಹಲ್ಲೆಗಳಾದವು. ಲಕ್ಷ್ಮೀನಾರಾಯಣನ ಮೇಲೆ ಹಲ್ಲೆ ನಡೆಸಿದವರಲ್ಲೊಬ್ಬನಾದ ರಮೇಶ ಎಂಬವನ ಮೇಲೆ ಅವನ ಕಡೆಯವರು ಪ್ರತಿ ದಾಳಿ ನಡೆಸಿ ಅವನು ಆಸ್ಪತ್ರೆ ಸೇರುವಂತೆ ಮಾಡಿದರು.

ಅಂತಿಮವಾಗಿ ಈ ಗುಂಪು ಕೆಲವು ಮಂಡಲ ಸದಸ್ಯರು ಹಾಗೂ ಮುಖ್ಯವಾಗಿ ಭಾಸ್ಕರ್‌ರನ್ನು ನೇರವಾಗಿ ಗುರಿ ಮಾಡಿ, ಅವರ ಮೇಲೆ ಜ. 31ರ ರಾತ್ರಿ ನಡೆದ ಸಂಯುಕ್ತ ವಾರ್ಷಿಕೋತ್ಸವದ ದಿನ ನಿರ್ಣಾಯಕ ಹಲ್ಲೆಗೆ ಸಜ್ಜಾಯಿತು.

### ಪೋಲೀಸರ ಬಿಗಿ ಕ್ರಮ

ರಾತ್ರಿ ವಾರ್ಷಿಕೋತ್ಸವಗಳು ಆತಂಕ ಮತ್ತು ಗಲಭೆಯ ವಾತಾವರಣದಲ್ಲಿಯೇ ನಿರ್ವಿಘ್ನವಾಗಿ ನಡೆದರೂ ರಾತ್ರಿ 12 ಗಂಟೆಯ ನಂತರ ಪರಿಸ್ಥಿತಿ ಇದ್ದ ಇಬ್ಬರು ಪೋಲೀಸರ ಕೈಮೀರಿದಾಗ ಹೆಚ್ಚಿನ ಪೋಲೀಸರೊಂದಿಗೆ ಧಾವಿಸಿ ಬಂದ ಬಾಳೆಹೊನ್ನೂರು ಸಬ್‌ಇನ್‌ಸ್ಪೆಕ್ಟರ್ ಗಂಗರಾಜ್ ಮತ್ತು ಎ.ಎಸ್.ಐ ನಂಜುಂಡಪ್ಪ ಬೆತ್ತ ಪ್ರಹಾರ ಮಾಡಿ ಸುಮಾರು 30-40ರಷ್ಟಿದ್ದ ಪಾನಮತ್ತ ಗುಂಪನ್ನು ಚದುರಿಸಬೇಕಾಯಿತು. ಈಗ ಪರಿಸ್ಥಿತಿ ಹತೋಟಿಯಲ್ಲಿದೆ ಎಂದು ತಿಳಿದುಬಂದಿದೆ.

### ಇಲಾಖೆಗಳು ಚುರುಕಾಗಬೇಕು

ಮಲ್ಲಸ್ವಾಮಿ 'ಮನೆ' ಕಟ್ಟಿದ್ದ ಜಾಗ ಊರ ಹೊರಗಿದೆ. ಸುತ್ತಮುತ್ತ ಇಬ್ಬರು ಹರಿಜನ-ಗಿರಿಜನರ ಮನೆ ಬಿಟ್ಟರೆ ಬೇರೆ ಮನೆಯಿಲ್ಲ. ಹಿಂದುಗಡೆ ಸಮೃದ್ಧವಾದ ಕಾಡು ಮತ್ತು ಗುಡ್ಡೆ. ಇಂಥ ಆಯಕಟ್ಟಿನ ಸ್ಥಳ ಎಂಥ ಉದ್ದೇಶಕ್ಕೆ ಬಳಕೆಯಾಗುತ್ತಿಂದು ಬಿಡಿಸಿ ಹೇಳಬೇಕಾಗಿಲ್ಲ.

ಅದಕ್ಕಾಗಿಯೇ ಇಷ್ಟೆಲ್ಲ ಗಲಭೆ ಸೃಷ್ಟಿಸಿರುವ ಶಕ್ತಿಗಳು (ಪಾಪ, ಮಲ್ಲಸ್ವಾಮಿ ನೆಪ ಮಾತ್ರ—) ಇಷ್ಟಕ್ಕೆ ಮಣಿಯುತ್ತವೆಯೆ ? ಎಂಬುದು ಪ್ರಶ್ನೆ. ಈ ಸ್ಥಳ ಪರಿಶೀಲಿಸಿದ ಜಿ. ಪ. ಸದಸ್ಯ ಎಚ್. ಎಂ. ಮಾಸ್ತಿ ಅವರು ಕೂಡ 'ಮನೆ' ಕೀಳಿಸಿದ್ದನ್ನು ಸಮರ್ಥಿಸಿದ್ದರು ಎಂಬುದು ಗಮನಾರ್ಹ.

ಈಗಲಾದರೂ ಅರಣ್ಯ ಮತ್ತು ಪೋಲೀಸು ಇಲಾಖೆಗಳು ಬಿಗಿಯಾದರೆ ಪ್ರಯೋಜನವಾದೀತು.

## ನ.ರಾ. ಪುರ ವರ್ತಕರ ಸಂಘದಿಂದ ರೋಗಿಗಳಿಗೆ ಹಾಲು - ಹಣ್ಣು ಹಂಚಿಕೆ

ನ. ರಾ. ಪುರ : ಇಲ್ಲಿನ ವರ್ತಕ ಸಂಘದವರು ಗಣರಾಜ್ಯೋತ್ಸವದ ಅಂಗವಾಗಿ, ಸರ್ಕಾರಿ ಆಸ್ಪತ್ರೆಯಲ್ಲಿ ರೋಗಿಗಳಿಗೆ ಹಾಲು, ಹಣ್ಣು ಮತ್ತು ಬ್ರೆಡ್ ಹಂಚಿದರು. ಈ ಕಾರ್ಯಕ್ರಮದಲ್ಲಿ ಸಂಘದ ಅಧ್ಯಕ್ಷ ಅಬ್ದುಲ್ ವಾಜಿದ್, ಕಾರ್ಯದರ್ಶಿ ಎಂ. ಎನ್. ರಮೇಶ್ ಮತ್ತು ಎಲ್ಲಾ ಪದಾಧಿಕಾರಿಗಳು, ಜಿ. ಪ. ಸದಸ್ಯ ಮೀಗ ಚಂದ್ರಶೇಖರ್, ತಹಸೀಲ್ದಾರ್ ಮಲ್ಲೇಶಯ್ಯ, ತಾಲ್ಲೂಕ್ ಪಂಚಾಯ್ತಿ ಕಾರ್ಯದರ್ಶಿ ಚಿದಾನಂದ ಹೆಗ್ಡೆ, ಇವರುಗಳು ಭಾಗವಹಿಸಿದ್ದರು.

## ಪೆಟ್ರೋಲ್ ದರ ಏರಿಕೆ ವಿರುದ್ಧ ಶೃಂಗೇರಿಯಲ್ಲಿ ಪ್ರತಿಭಟನೆ

ಶೃಂಗೇರಿ: ಕೇಂದ್ರ ಸರ್ಕಾರವು ಏಕಾಏಕಿ ಪೆಟ್ರೋಲ್ ಬೆಲೆಯನ್ನು ಗಣನೀಯವಾಗಿ ಏರಿಸಿರುವುದರ ವಿರುದ್ಧ ಇಲ್ಲಿನ ಚಾಲಕರ ಸಂಘದ ನೇತೃತ್ವದಲ್ಲಿ ಜ. 27ರಂದು ಪ್ರತಿಭಟನಾ ಪ್ರದರ್ಶನ ನಡೆಯಿತು.

ಸಂಘದ ಅಧ್ಯಕ್ಷ ಕಲ್ಕುಳಿ ವಿಠಲ ಹೆಗ್ಡೆ, ಕಾರ್ಯದರ್ಶಿ ಶಿವಪ್ಪ ಇವರ ನೇತೃತ್ವದಲ್ಲಿ ಪೇಟೆಯ ಪ್ರಮುಖ ಬೀದಿಗಳಲ್ಲಿ ರಿಕ್ಷಾಗಳ ಮೆರವಣಿಗೆ ನಡೆಸಿ, ಸರ್ಕಾರಕ್ಕೆ ತಹಸೀಲ್ದಾರರ ಮೂಲಕ ಮನವಿಯೊಂದನ್ನು ಸಲ್ಲಿಸಲಾಯಿತು.

ರಾಜೀವ್ ಗಾಂಧಿ ಮತ್ತು ಕೇಂದ್ರ ಸರ್ಕಾರದ ಜನವಿರೋಧಿ ನೀತಿಗಳ ವಿರುದ್ಧ ಘೋಷಣೆ ಕೂಗಲಾಯಿತಲ್ಲದೆ, ಶೃಂಗೇರಿಗೆ ಅತ್ಯವಶ್ಯಕವಾದ ಪೆಟ್ರೋಲ್ ಬಂಕ್ ಸ್ಥಾಪಿಸಬೇಕೆಂದು ಸಹ ಒತ್ತಾಯಿಸಲಾಯಿತು.

ಮೆರವಣಿಗೆಕಾರರನ್ನುದ್ದೇಶಿಸಿ ಮಾತನಾಡಿದ ವಿಠಲ ಹೆಗ್ಡೆ, ಪೆಟ್ರೋಲ್ ಬೆಲೆ ಏರಿಕೆಯ ಬಿಸಿ ವಾಹನಗಳ ಮಾಲೀಕರಿಗೆ ಮಾತ್ರ ತಟ್ಟುವುದಲ್ಲ: ವಾಹನಗಳನ್ನವಲಂಬಿಸಿದ ಕಾರ್ಮಿಕರ ಬದುಕಿಗೂ ತಟ್ಟುತ್ತದೆ. ಅಷ್ಟೇ ಅಲ್ಲ, ಇದರ ಪರೋಕ್ಷ ದುಷ್ಪರಿಣಾಮ ಪ್ರತಿಯೊಂದು ಜೀವನಾವಶ್ಯಕ ವಸ್ತುಗಳ ಬೆಲೆಯ ಮೇಲೂ ಉಂಟಾಗಿ ಬೆಲೆ ಏರಿಕೆ, ಹೊರೆಯುಬ್ಬರಕ್ಕೆ ಹೇಗೆ ಕಾರಣವಾಗುತ್ತದೆ ಎಂಬುದನ್ನು ವಿವರಿಸಿ, ಈ ಕಾರಣದಿಂದ ಈ ಪ್ರತಿಭಟನೆ ಕೇವಲ ವಾಹನ ಚಾಲಕರದ್ದು ಮಾತ್ರವಾಗಿರದೆ, ಎಲ್ಲಾ ಸಾರ್ವಜನಿಕರ ಪರವಾದ ಪ್ರತಿಭಟನೆಯಾಗಿದೆ ಎಂದರು.

---

ಪ್ರಿಯ ಓದುಗರೆ,

ಚಂದಾ ಸಂಗ್ರಹಕ್ಕಾಗಿ ಪ್ರಸ್ತುತ ನಮ್ಮ 14.2.88ರ ಸಂಚಿಕೆ ಪ್ರಕಟವಾಗುವುದಿಲ್ಲ. ಇದೊಂದು ತಿಂಗಳು ಮಾತ್ರ ಹೀಗೆ ಬಿಡುವಿಟ್ಟು ನಮ್ಮೊಡನೆ ಸಹಕರಿಸಿ. ಚಂದಾ ಬಾಕಿ ಇರುವವರೆಲ್ಲ ಚಂದಾ ಹಣ ಕಳುಹಿ ಸಹಕರಿಸಿ. —ಸಂಪಾದಕ.

# ನಮ್ಮ ಸಹ ಮಾನವರಿಗೆ ಹೇಲು ತಿನ್ನಿಸುವ ನಮ್ಮ ಜಾತಿ ವ್ಯವಸ್ಥೆ

ಕಳೆದ ಆಗಸ್ಟ್ ತಿಂಗಳಲ್ಲಿ ಬೆಳಗಾವಿ ಜಿಲ್ಲೆಯ ಬೆಂಡಿಗೇರಿ ಎಂಬ ಹಳ್ಳಿಯಲ್ಲಿ ಮೇಲ್ಜಾತಿ ಭೂಮಾಲೀಕರು ತಮ್ಮ ಹೊಲದಲ್ಲಿ ಹರಿಜನರು ಜೋಳದ ಗಿಡ ಕೊಯ್ದರೆಂಬ ನೆಪ ಒಡ್ಡಿ ಐವರು ಹರಿಜನರನ್ನು ಕಟ್ಟಿ ಹಾಕಿ ಥಳಿಸಿ, ಅವರಿಗೆ ಖುದ್ದು ಹೇಲು ತಿನ್ನಿಸಿದ ಪ್ರಕರಣ ಇನ್ನೂ ಹಸಿಯಾಗಿರುವಾಗಲೇ, ಅಂಥದೇ ಇನ್ನೊಂದು ಪ್ರಕರಣ ಇಲ್ಲೇ ನೆರೆಯಲ್ಲಿ, ಶಿವಮೊಗ್ಗ ಜಿಲ್ಲೆಯಲ್ಲಿ ನಡೆದಿದೆ.

ಬೆಂಡಿಗೇರಿಯಲ್ಲಿ ಭಾರತೀಯತೆಯ ಮುಖಕ್ಕೆ ಹತ್ತಿದ ಹೇಲನ್ನು ತೊಳೆದು ಸ್ವಚ್ಛಗೊಳಿಸಬೇಕೆಂದು ವಿಧಾನ ಮಂಡಲದ ತನಿಖಾ ಸಮಿತಿ, ರಾಜ್ಯ ದಲಿತ ಸಂಘರ್ಷ ಸಮಿತಿ, ಪ್ರಗತಿಪರ ಸಂಘಟನೆಗಳು, ಪತ್ರಿಕೆಗಳು — ಮುಂತಾದವರೆಲ್ಲ ಧ್ವನಿಯೆತ್ತಿ ಕೂಗುತ್ತಿರುವಾಗ, ಅದಕ್ಕಾಗಿಯೇ ದ.ಸಂ.ಸ. ವಿಧಾನ ಸೌಧದೆದುರು 80 ಸಾವಿರ ದಲಿತರ–ಪ್ರಗತಿಪರರ ಬೃಹತ್ ಪ್ರತಿಭಟನಾ ಪ್ರದರ್ಶನ ಏರ್ಪಡಿಸಿದ ನಾಲ್ಕೇ ದಿನದಲ್ಲಿ, ಜ. 29ರಂದು ಬೆಂಡಿಗೇರಿ ಮರುಕಳಿಸಿದೆ.

ಸೊರಬ ತಾ|| ತಟ್ಟೂರು ಗ್ರಾಮದ ಚಂದ್ರಪ್ಪ ಎಂಬ 35ರ ದಲಿತ ಯುವಕ, ದೇವಾಲಯದಲ್ಲಿ ಪೂಜೆ ಮಾಡಿಸಬೇಕೆಂದು ಹಟ ಹಿಡಿದರೆಂಬ ಕಾರಣಕ್ಕೆ, ಅದೇ ಗ್ರಾಮದ ಲಿಂಗಾಯಿತರ ಗುಂಪೊಂದು ಅವರನ್ನು ಟೆಲಿಫೋನ್ ಕಂಬಕ್ಕೆ ಕಟ್ಟಿ ಹಾಕಿ, ಹೊಡೆದು–ಬಡಿದು, ಚಪ್ಪಲಿಯಿಂದ ಥಳಿಸಿ, ಅಷ್ಟಕ್ಕೂ ಹೊಟ್ಟೆಯೊಳಗಿನ ಜಾತಿ ಮಾರಿ ತಣಿಯದೆ, ಚಂದ್ರಪ್ಪನಿಗೆ ಹೇಲು ತಿನ್ನಿಸಿ ಕೈಬಿಟ್ಟಿದೆ. ಆತನ ಮೇಲೆ ಹಲ್ಲೆ ನಡೆಸಿರುವುದು ಇದು ಎರಡನೇ ಸಲವಂತೆ.

ಚಂದ್ರಪ್ಪನ ದೂರಿನ ಮೇರೆಗೆ ಆನವಟ್ಟಿ ಪೋಲೀಸರು ಆ ಗ್ರಾಮದ ಮಂಡಲ ಪಂಚಾಯಿತಿ ಜನತಾ ಸದಸ್ಯ ರವಿ ಶಂಕರೇಗೌಡ ಮತ್ತು ಇತರ 7 ಮಂದಿಯನ್ನು ಬಂಧಿಸಿದರೂ ಸಾಗರದ ನ್ಯಾಯಾಲಯ ಅವರುಗಳಿಗೆ ಜಾಮೀನು ದಯಪಾಲಿಸಿದೆ. ಜಿಲ್ಲಾಧಿಕಾರಿಗಳು ಹಾಗೂ ಗ್ರಾಮಕ್ಕೆ ಭೇಟಿ ಕೊಟ್ಟಿದ್ದ ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿಗಳು ವಿಷಯವನ್ನು ಆದಷ್ಟೂ ಮುಚ್ಚಿಡುವುದಕ್ಕೂ, ಆರೋಪಿಗಳನ್ನು ಬಚಾವು ಮಾಡುವುದಕ್ಕೂ ಪ್ರಯತ್ನ ನಡೆಸಿರುವುದಾಗಿ ವರದಿಯಾಗಿದೆ.

* * *

'ಜಾತಿ ಭೇದ ಸಲ್ಲದು, ಎಲ್ಲರೂ ಒಂದಾಗಿ ಚಂದಾಗಿ ಬಾಳಬೇಕು' ಎಂದಾಗೆಲ್ಲ, "ಛೆ ಛೆ, ಅದೆಲ್ಲಿ ಸಾಧ್ಯ? ಜಾತಿ–ವರ್ಣಗಳೆಲ್ಲ ದೈವ ನಿರ್ಮಿತ, ಧರ್ಮಸಮ್ಮತ. ಜಾತಿ, ವರ್ಣ ಸಂಕರವೆಲ್ಲ ಅಧರ್ಮ, ದೈವದ್ರೋಹ" ಎಂಬಂತಾಗಿ ಪ್ರತಿಪಾದಿಸುವ ನಮ್ಮ ಧರ್ಮಿಷ್ಠರು, ನಮ್ಮ ಕಣ್ಮುಂದೆ ಕಾಣುವ ಈ ಜಾತಿ ಮೂಲವಾದ ಇಂಥ ಕೊಳಕುಗಳಿಗೆ ಮಾತ್ರ ನಮ್ಮ ಧರ್ಮ, ಧರ್ಮಶಾಸ್ತ್ರಗಳು ಕಾರಣವಲ್ಲ ಎಂದು ಜಾರಿಕೊಳ್ಳುವ ಮೊದಲು ಸ್ವಲ್ಪ ಆತ್ಮ ವಿಮರ್ಶೆ–ಅವರಲ್ಲಿ ಆತ್ಮವೆಂಬುದೊಂದೇನಾದರೂ ಇದ್ದರೆ—ಮಾಡಿಕೊಳ್ಳಬೇಕಾಗಿದೆ.

ಜಾತಿ ಎಂಬ ಭೇದವೊಂದು ಇಲ್ಲದಿರುತ್ತಿದ್ದರೆ, ಜಾತಿ ಭೇದವೆಂಬುದು ಅಕ್ಷಮ್ಯವಾದ ಪಾಪ, ದೈವದ್ರೋಹ ಇತ್ಯಾದಿ ಭಯ–ಭಕ್ತಿಯ ಭಾವನೆಗಳು ನಮ್ಮ ಸಮಾಜದಲ್ಲಿ ಹರಡಿರುತ್ತಿದ್ದರೆ—ಇಂದು ಇದರ ತದ್ವಿರುದ್ಧವಾದ ನಂಬಿಕೆಗಳು ಹರಡಿರಲು ಕಾರಣರಾಗಿರುವ 'ಧರ್ಮಾತ್ಮರು' ಮತ್ತು 'ಧರ್ಮಶಾಸ್ತ್ರಜ್ಞರು' ಈ ದಿಕ್ಕಿನಲ್ಲಿ ಒಂದಿಷ್ಟು ಪ್ರಾಮಾಣಿಕ ಕೆಲಸ ಮಾಡಿರುತ್ತಿದ್ದರೆ ಬೆಂಡಿಗೇರಿಯಲ್ಲಾಗಲಿ ತಟ್ಟೂರಿನಲ್ಲಾಗಲಿ ಅಥವಾ ದೇಶದ ಇನ್ನೆಲ್ಲೇ ಆಗಲಿ ಇಂಥ ಹೇಸಿಗೆಯ 'ಖ್ಯಾತಿ' ನಮ್ಮ ದೇಶದ ಜನಾಂಗಕ್ಕೆ ತಟ್ಟುತ್ತಿರಲಿಲ್ಲ ಅಲ್ಲವೆ?

ಇದನ್ನು ಆಗಗೊಡದ ಈ ನಮ್ಮ 'ಧಾರ್ಮಿಕ ಶ್ರೇಷ್ಠತೆ'ಯ ಬಗ್ಗೆ ಇನ್ನೂ ಬೆನ್ನು ಚಪ್ಪರಿಕೆಯನ್ನೇ ಮಾಡಿಕೊಳ್ಳೋಣವೆ? ಅಥವಾ ನಮ್ಮ ನಮ್ಮ ಈ ಕೊಳೆತ ಮನಸ್ಸುಗಳನ್ನು ಆತ್ಮ ವಿಮರ್ಶೆಯ ಮೂಲಕ ಒಂದಿಷ್ಟಾದರೂ ಸ್ವಚ್ಛಗೊಳಿಸಿಕೊಂಡು, ನಮ್ಮ 'ಧರ್ಮ'ಕ್ಕೆ ನಿಜವಾಗಿಯೂ ಒಂದಿಷ್ಟು ಶ್ರೇಷ್ಠತೆ ತಂದುಕೊಡೋಣವೆ?

(ಇದನ್ನು ಹೀಗೆ ಬರೆದರೆ 'ಬಹಳ ಕಟುವಾಯಿತು, ಅಸಹನೀಯವಾಯಿತು' ಎನ್ನುವ ಕೆಲವು ಮಂದಿ, ಆ ಬಡ ವ್ಯಕ್ತಿಗೆ ಹೇಲು ತಿನ್ನುವುದು ಎಷ್ಟು ಕಟು, ಕ್ರೂರ, ಅಸಹನೀಯ ಆಗಿದ್ದೀತು—ಎಂದು ಯೋಚಿಸಬಲ್ಲರೆ?) —ಸಿರಿಮನೆ ನಾಗರಾಜ್.

## ಪದ್ಯದಂಕಣ

### ಶಿಷ್ಯೋತ್ತಮರು

ನಿನ್ನೆತ್ತ ಜಡಮಾಸ್ತರು
ಶಿಷ್ಯನೊಬ್ಬನ
ಕಾಲಿಗೆರಗಬೇಕಾಯ್ತು
ಕಾರಣ– ಅವನೊಬ್ಬ
ಮಠಾಧಿಪತಿಯಾಗಿದ್ದ.

ಮತ್ತೊಬ್ಬ ಶಿಷ್ಯನ
ಕಾಲು ಹಿಡಿಯ
ಬೇಕಾಯ್ತು ಮಾಸ್ತರು
ಕಾರಣ– ಅವನು
ಸಾಲ ಕೊಡುವ
ಧನಿಕನಾಗಿದ್ದ

ಇನ್ನೊಬ್ಬ ಶಿಷ್ಯನ
ಕಾಲ ಬಳಿ ಕುಳಿತು
ಪ್ರಾರ್ಥಿಸಿದರು
ಮಾಸ್ತರು; ಕಾರಣ–
ಅವನು ಆ ರಾಜ್ಯದ
ಸಚಿವನಾಗಿದ್ದ

ಮತ್ತೊಬ್ಬ ಶಿಷ್ಯನ
ಕಾಲ ತೊಳೆಯ
ಬೇಕಾಯ್ತು ಮಾಸ್ತರು
ಕಾರಣ– ಅವನು
ಅವರ ಮಗಳ
ಕೈ ಹಿಡಿ(ದಿದ್ದ)ಯಲಿದ್ದ!

—ಎಸ್. ಎಸ್. ಸೀತಾರಾಂ, ಸತ್ತಿಕಲ್ಲ




### ಓ ಹಣವೇ

ಓ ಹಣವೇ
ನಿನ್ನಯ ಗುಣವೇ!
ನಿನ್ನ ಆಡಂಬರವೇ,
ಅಲ್ಲ, ಅಟ್ಟಹಾಸವೇ!
ಏನು ಹೇಳಲಿ ನಿನ್ನ ಮಹಿಮೆ?

ತಂದೆ ತಾಯಿಯರ ಮಮತೆ ಎಣಿಸದು
ಗಂಡ ಹೆಂಡಿರ ಪ್ರೇಮ ಎಣಿಸದು
ಹೆತ್ತ ಮಗನಿಂದಲೇ ಮಾತಾ–ಪಿತರ
ಮರಣ ಹೋಮ
ಕೈ ಹಿಡಿದ ಪತಿಯಿಂದಲೇ ಪತ್ನಿಯ
ದಾರುಣ ಮರಣ

ಎಲ್ಲಿದೆ ಮಾತೃದೇವೋ ಭವ?
ಎಲ್ಲಿದೆ ಪಿತೃದೇವೋ ಭವ?
ಎಲ್ಲಿದೆ 'ಸಪ್ತ ಪದಿ'ಯ ಪ್ರತಿಜ್ಞಾ ವಿಧಿ?
ಎಲ್ಲಿದೆ ಮಾನವೀಯ ಸಂಸ್ಕೃತಿ?
ಓ ಹಣವೇ
ನಿನ್ನಯ ಗುಣವೇ,
ಎಂದು ಕೊನೆ ನಿನ್ನ ಈ ವಿಡಂಬನೆಗೆ...?

—ಕೆ. ಆರ್. ಅನ್ನಪೂರ್ಣ,
9ನೇ ತರಗತಿ, ಕೊಪ್ಪ.

ಒಂದು ಸತ್ಯಕತೆ

## ಬೆಂಕಿಬಿದ್ದ ಮನೆಯಲ್ಲಿ ಹೊಟ್ಟೆಬಾಕನ 'ಸೇವೆ'

ಒಂದು ಸಣ್ಣ ಹಳ್ಳಿ. ಅಲ್ಲಿ ಒಮ್ಮೆ ಒಂದು ಗುಡಿಸಲಿಗೆ ಬೆಂಕಿ ಬಿತ್ತು. ಹಳ್ಳಿಯ ಜನರೆಲ್ಲ ಬೆಂಕಿ ಆರಿಸಲು ಧಾವಿಸಿ ಬಂದರು. ಅವರಲ್ಲಿ ಕರಡಿಗೋರಯ್ಯನೂ ಇದ್ದ. ಅವನು ಹಿಂದೊಮ್ಮೆ ಕಾಡಿನ ದಾರಿಯಲ್ಲಿ ಕರಡಿಯ ಕೈಗೆ ಸಿಕ್ಕಿ ಹಾಕಿಕೊಂಡು ಬಚಾವಾದವನು. ಆದ್ದರಿಂದಲೇ ಅವನಿಗೆ ಆ ಹೆಸರು.

ಎಲ್ಲರೂ ಬೆಂಕಿ ಆರಿಸುತ್ತಿದ್ದಾಗ ಗೋರಯ್ಯ ಅಟ್ಟ ಹತ್ತಿದ. ಆಹಾ, ಒಂದು ಇಡೀ ಬಾಳೆಗೊನೆ ಹಣ್ಣಾಗಿ ಕೂತಿದೆ! ಗೋರಯ್ಯ ತಡ ಮಾಡದೆ ಕಾರ್ಯ ಮಗ್ನನಾದ.

ಮೇಲೆ ಮಾಡಿನಲ್ಲಿ ಬೆಂಕಿ ಉರಿದು ಕೊಳ್ಳಿಗಳು ಮೈಮೇಲೆ ಬೀಳುವಾಗ ಗಳಿಗೊಮ್ಮೆ ಗೋರಯ್ಯ, "ಇದು ಆಗೂ ನಂಬ್ರಲ್ಲ...." ಎನ್ನುತ್ತ ತನ್ನ ಕೆಲಸ ಮುಂದುವರಿಸಿಯೇ ಇದ್ದ.

ಕೊನೆಗೊಮ್ಮೆ ಯಾರೋ ಇದನ್ನು ಕೇಳಿಸಿಕೊಂಡರು. ಪಾಪ, ಗೋರಯ್ಯ ಒಬ್ಬನೇ ಏನೋ ಮಾಡಲು ಹೆಣಗುತ್ತಿರಬೇಕು ಎಂದುಕೊಂಡು ಅವರೆಲ್ಲ ಅಟ್ಟ ಹತ್ತಿ ನೋಡುತ್ತಾರೆ,... ಗೋರಯ್ಯ ಮೇಲಿನಿಂದ ಬೀಳುವ ಕೊಳ್ಳಿಗಳನ್ನೂ ಲೆಕ್ಕಿಸದೆ, ಆಗಲೇ ಅರ್ಧ ಗೊನೆ ಖಾಲಿ ಮಾಡಿದ್ದಾನೆ!

"ಎಲ್ಲರೂ ಬೆಂಕಿ ಆರಿಸುತ್ತಿದ್ದರೆ, ಹೊಟ್ಟೆ ಬಾಕ, ನೀನು ನಮಗೆ ನಿನ್ನನ್ನೂ ಹೊರುವ ಕೆಲಸ ಕೊಡಬೇಕೆಂದಿದ್ದೀಯಾ?" ಎಂದು ಬೈದು ಅವನನ್ನು ಕೆಳಗಿಳಿಸಿದರು.

ಕೆಳಗಿಳಿಯುವಾಗಲೂ ಅವನು ಬಾಳೆಗೊನೆಯನ್ನು ಮರೆಯಲಿಲ್ಲ!

—ಎಸ್. ಎಸ್. ನಾಗಮಣಿ
7ನೇ ತರಗತಿ, ಕಿಗ್ಗ

### ಹಕ್ಕಿಯು ಗೂಡು ಬಿಟ್ಟು ಹಾರಿತು

ನಾನು ನನ್ನ ತಮ್ಮ
ಆಡಲೆಂದು ಗದ್ದೆಗೆ ಹೋದೆವು
ಅಲ್ಲಿ ಒಂದು ಹಕ್ಕಿಯು
ಧರೆಯ ಮೇಲೆ ಗೂಡು ಕಟ್ಟಿತ್ತು.
ಅದನ್ನು ನನ್ನ ತಮ್ಮ
ಮುಟ್ಟಲೆಂದು ಹೋದನು.
ಆಗ ಹಕ್ಕಿಯು ಗೂಡು ಬಿಟ್ಟು ಹಾರಿತು.

ಯು. ಎಂ. ವೀಣಾ, ಸಿಡುವಾಳೆ

### 'ಎತ್ತರವಾದುವು'

1) ಪ್ರಪಂಚದಲ್ಲೇ ಅತಿ ಎತ್ತರವಾದ ಜಲಪಾತ: —ವೆನಿಜುವೆಲಾ ಫಾಲ್ಸ್; ಇದರ ಎತ್ತರ 2,648 ಅಡಿಗಳು
2) ಕಾಶಿ ವಿಶ್ವನಾಥ ದೇವಾಲಯ ಗೋಪುರದ ಎತ್ತರ —15.5 ಮೀಟರುಗಳು
3) ಜಪಾನಿನ ಅತಿ ಎತ್ತರದ ಶಿಖರ: —ಫ್ಯೂಜಿಯಾಮ.
4) ಪ್ರಪಂಚದಲ್ಲೇ ಅತಿ ಎತ್ತರವಾದ ಮಸೀದಿ: —ಸುಲ್ತಾನ್ ಹಸನ್; ಈಜಿಪ್ಟಿನ ಕೈರೋದಲ್ಲಿದೆ.
5) ಪ್ರಪಂಚದಲ್ಲೇ ಅತಿ ಎತ್ತರವಾದ "ಗಗನಚುಂಬಿ" ಕಟ್ಟಡ: —"ಸಿಯರ್ಸ್ ಟವರ್"

ಲಲಿತ ಟಿ. ಎಚ್.
7ನೇ ತರಗತಿ, ತೆಂಗಿನಮನೆ

### ಸ್ಪರ್ಧೆಗೊಂದು ಸ್ಪರ್ಧೆ!

ಪ್ರೀತಿಯ ಚಿನ್ನಾರಿಗಳೆ,

ನಿಮ್ಮ 'ಚಿನಾರಿ ಕೂಟ'ದಲ್ಲಿ ಏನೂ ಸ್ಪರ್ಧೆ ಇಲ್ಲದೆ ಬಹಳ ಸಮಯವಾಯಿತಲ್ಲವ? ಗೆದ್ದವರಿಗೆ ಬಹುಮಾನ ಕೊಡುವುದಕ್ಕೆಂದು ನಾವು ಹೊಸದಾಗಿ ತಂದಿಟ್ಟಿರುವ ಮಕ್ಕಳ ಕಥೆಗಳ ಪುಸ್ತಕಗಳು ಹಾಗೇ ಕೂತುಬಿಟ್ಟಿವೆ. ಏನು ಮಾಡೋಣ?

ಒಂದು ಉಪಾಯ ಮಾಡೋಣವೆ? ಸ್ಪರ್ಧೆಗೆ ಆಗುವಂಥ ಯಾವುದಾದರೊಂದು ವಿಷಯವನ್ನೋ, ಬಗೆಯನ್ನೋ ನೀವೇ ಕಳಿಸಿ ಕೊಡಿ. ಉತ್ತಮವಾದ ಆಯ್ಕೆಗೆ ಅದಕ್ಕೇ ಒಂದು ಬಹುಮಾನ ಕೊಟ್ಟುಬಿಡೋದು. ಸ್ಪರ್ಧೆಯಲ್ಲಿ ಗೆದ್ದವರಿಗೆ ಮತ್ತೆ ಬೇರೆಯೇ ಬಹುಮಾನ. ಹೇಗಿದೆ ಉಪಾಯ?

ಹಿಂದೊಮ್ಮೆ ಮಾಡಿದ್ದಂತೆ ಒಂದು ಅಪೂರ್ಣ ಕಥೆಯೋ, ಉತ್ತಮ ಒಗಟು ಅಥವಾ ಜಾಣ ಪ್ರಶ್ನೆಗಳೋ, ಪ್ರಬಂಧ–ಕವನ ಇತ್ಯಾದಿ ಸ್ಪರ್ಧೆ ಆಗಬಹುದೆಂದಾದರೆ ಅದಕ್ಕೆ ತಕ್ಕ ವಿಷಯವೋ— ಹೀಗೆ ನಿಮ್ಮ ಕಲ್ಪನೆಗೆ ಸರಿ ಕಂಡಿದ್ದನ್ನು ಸೂಚಿಸಿ. (ಪ್ರಶ್ನೆಗೆ ಉತ್ತರಗಳನ್ನು ನಿಮ್ಮ ಸ್ನೇಹಿತರಿಂದ ಗುಟ್ಟಾಗಿಡಿ!)

ನಿಮ್ಮ ಪತ್ರ ನಮಗೆ 15-3-88ರೊಳಗಾಗಿ ತಲುಪುವಂತೆ ಕಳಿಸಿ

—ಸಂಪಾದಕ.

# ಬೆಂಡಿಗೇರಿ ದಲಿತರಿಗೆ ನ್ಯಾಯ : ಬೃಹತ್ ಸಮಾವೇಶದ ಒತ್ತಾಯ

ಬೆಳಗಾವಿ ಜಿಲ್ಲೆಯ ಬೆಂಡಿಗೇರಿ ಎಂಬ ಹಳ್ಳಿಯಲ್ಲಿ ಕ್ಷುಲ್ಲಕ ಕಾರಣಕ್ಕಾಗಿ ಹಿಂದೂ ಧರ್ಮದ ಮೇಲ್ಜಾತಿಯ ಜನರು ಅಸಹಾಯಕ ದಲಿತರಿಗೆ ಬಹಿರಂಗವಾಗಿ ಮಲವನ್ನು ತಿನ್ನಿಸಿದ್ದಾರೆ.

ಇದು ಇಡೀ ಜಗತ್ತಿನ ಚರಿತ್ರೆಯಲ್ಲಿ ಎಂದೂ ಎಲ್ಲಿಯೂ ನಡೆಯದಿರುವಂತಹ, ನಡೆಯಬಾರದಂತಹ, ಅತ್ಯಂತ ಹೇಯವಾದ, ಸಹಿಸಲಸಾಧ್ಯವಾದ ಘೋರವಾದ ಪಾಪ ಕೃತ್ಯ.

ಅದಕ್ಕಾಗಿ ಸವರ್ಣೀಯ ಜಾತಿಯ ಕೊಳಕು ಮನಸ್ಸನ್ನು ಖಂಡಿಸಿ, ತಪ್ಪಿತಸ್ಥರನ್ನು ಶಿಕ್ಷಿಸುವಂತೆ ಒತ್ತಾಯಿಸಿ ಅಸಹಾಯಕ ದಲಿತರಿಗೆ ನ್ಯಾಯ ದೊರಕಿಸಲು ದ. ಸಂ. ಸ. ನೇತೃತ್ವದಲ್ಲಿ ಬೆಂಗಳೂರಿನಲ್ಲಿ ವಿಧಾನಸೌಧದ ಎದುರು 25-1-1988 ರಂದು 80 ಸಾವಿರಕ್ಕೂ ಹೆಚ್ಚು ದಲಿತರು ರಾಜ್ಯದ ಎಲ್ಲೆಡೆಯಿಂದಲೂ ಬಂದು ಖಂಡನಾ ಸಭೆಯಲ್ಲಿ ಪಾಲ್ಗೊಂಡಿದ್ದರು.

ಅಂದಿನ ಸಭೆಯಲ್ಲಿ ಆಂಧ್ರದ ದಲಿತ ಮಹಾ ಸಭಾದ ಅಧ್ಯಕ್ಷರಾದ ಬೊಜ್ಜ ತಾರಕಂ, ಸಾಹಿತಿ ದೇವನೂರ ಮಹಾದೇವ, ಕವಿ ಸಿದ್ಧಲಿಂಗಯ್ಯ, ಪ್ರೊ|| ಬಿ. ಕೃಷ್ಣಪ್ಪ ಡಾ|| ಚಿದಾನಂದ ಮೂರ್ತಿ, ದ. ಸಂ. ಸ. ರಾಜ್ಯ ಸಂಚಾಲಕರಾದ ಚಂದ್ರಪ್ರಸಾದ್ ತ್ಯಾಗಿ ಮುಂತಾದವರು ಭಾಷಣ ಮಾಡಿದರು.

ಅಂದಿನ ಕಾರ್ಯಕ್ರಮದಲ್ಲಿ ಚಿಕ್ಕಮಗಳೂರು ಜಿಲ್ಲಾ ಶಾಖೆಯಿಂದ 2 ಸಾವಿರಕ್ಕೂ ಹೆಚ್ಚು ದಲಿತರು ಪಾಲ್ಗೊಂಡಿದ್ದರು. ಬೆಂಡಿಗೇರಿ ದಲಿತರಿಗೆ ನ್ಯಾಯ ಸಿಗುವಂತೆ ಮನಸ್ಸುಳ್ಳ ಮಾನವರೆಲ್ಲರೂ ಸಹಕಾರ ನೀಡಬೇಕೆಂದು ದಲಿತ ಸಂಘರ್ಷ ಸಮಿತಿ ಕೋರುತ್ತದೆ. (ವರದಿ: ಕಲ್ಲಯ್ಯ.)

(25-1-1988ರಂದು ವಿಧಾನ ಸೌಧದೆದುರು ಏರ್ಪಡಿಸಿದ್ದ ಪ್ರತಿಭಟನಾ ಪ್ರದರ್ಶನಕ್ಕೆ ಸ್ವಸ್ಥ ಮನಸ್ಸಿನ ಎಲ್ಲರಿಗೂ ಕರೆ ಕೊಟ್ಟ ದಲಿತ ಸಂಘರ್ಷ ಸಮಿತಿ ಹೊರಡಿಸಿದ ಕರಪತ್ರ.)

## ಮಲ ತಿನ್ನಿಸಿದವರನ್ನು ಶಿಕ್ಷಿಸಿ ಬೆಂಡಿಗೇರಿ ದಲಿತರಿಗೆ ನ್ಯಾಯ ಕೊಡಿ

**25-1-1988ರ ಸೋಮವಾರ ಪ್ರತಿಭಟನಾ ಮೆರವಣಿಗೆ ಮತ್ತು ಬಹಿರಂಗ ಸಭೆ**

ನಮ್ಮ ಸಮಾಜವು ದಿನೇ ದಿನೇ ಕೊಳೆತುಹೋಗುತ್ತಿದೆ. ಈ ಸಮಾಜವನ್ನು ಸಾಯಿಸುತ್ತಿರುವ ವಿಷಗಳಲ್ಲೊಂದಾದ ಜಾತಿ ವ್ಯವಸ್ಥೆಯು, ಒಡೆದು ಛಿದ್ರವಾಗಿರುವ ಜೀವಗಳನ್ನು ಇನ್ನಷ್ಟು ಚೂರು ಮಾಡುತ್ತಾ ಮಾನವಂತ ಬದುಕನ್ನು ಇಲ್ಲವಾಗಿಸುತ್ತಿದೆ.

ಇಂಥ ಕೊಳೆಯುತ್ತಿರುವ ಸಂಸ್ಕೃತಿಯ ಪ್ರತೀಕ—ಬೆಂಡಿಗೇರಿ. ಬೆಳಗಾವಿ ತಾಲ್ಲೂಕಿನ ಸಣ್ಣ ಹಳ್ಳಿಯಾದ ಈ ಬೆಂಡಿಗೇರಿಯಲ್ಲಿ ಕಳೆದ ಆಗಸ್ಟ್‌ನಲ್ಲಿ ದಲಿತರಿಗೆ ಊರಿಗೆ ದೊಡ್ಡವರಾದ ಮೇಲುಜಾತಿ ಲಿಂಗಾಯಿತರು ಹೇಲು ತಿನ್ನಿಸಿ, ಈ ಸುದ್ದಿ ಕಿವಿಗೆ ಬಿದ್ದವರೆಲ್ಲ ಎಂದೆಂದೂ ತೃಪ್ತಿಯಿಂದ ಊಟ ಮಾಡಲಾಗದಂತೆ, ಹೇಸಿಕೊಳ್ಳುವಂಥ ಕೃತ್ಯ ಎಸಗಿದ್ದಾರೆ.

ದಲಿತರ ಮೇಲಿನ ದೌರ್ಜನ್ಯಗಳು ಎಂದೂ ಇಷ್ಟು ಭೀಕರವಾಗಿರಲಿಲ್ಲ. ಸಿಟ್ಟು, ಆಕ್ರೋಶಗಳ ಮೂಲವಾದ ದೌರ್ಜನ್ಯಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗಿರುವ ಬೆಂಡಿಗೇರಿಯ ದೊಡ್ಡ ಮನುಷ್ಯರು, ತಾವು ಕೊಡುವ ಹಿಂಸೆಯಿಂದ ಆನಂದವನ್ನು ಅನುಭವಿಸುವಂಥ ಪಾಪಕೂಪದಲ್ಲಿ ಸಿಕ್ಕಿದ್ದಾರೆ.

ಈ ಪ್ರಕರಣದ ತನಿಖೆ ನಡೆಸಿದ [illegible] ನ ಮಂಡಲ ಸಮಿತಿಯು "ಹರಿಜನರಿಗೆ ಮಲ ತಿನ್ನಿಸುವುದಕ್ಕಿಂತ, ವಿಷ ಕುಡಿಸಿ [illegible] ಸಿ ಬಿಟ್ಟಿದ್ದರೆ ಲೇಸಿತ್ತು" ಎಂದು [illegible] ಹೇಳುವಷ್ಟು ಘೋರವಾದ ಘಟನೆಯಿದು.

ಬೆಂಡಿಗೇರಿ—ನಾವು ಮನುಷ್ಯರಾಗದೆ ತಲುಪಿರುವ ಪಾತಾಳದ ಸೂಚನೆ. ನಾವು ಈಗ ನಮ್ಮ ನಮ್ಮ ಎದೆಯ ತಡಕಿ ಅಳಿದುಳಿದಿರಬಹುದಾದ ಮಾನವತೆಯನ್ನು ಆರಿಸಿಕೊಂಡು ಬಾಳದಿದ್ದರೆ, ಇಡೀ ಜನಾಂಗವೇ ಈ ಜಾತಿ ವಿಷದಲ್ಲಿ ಉಸಿರು ಕಟ್ಟಿ ಸತ್ತು ಹೋಗುವುದು ಖಂಡಿತವೆಂದು ತೋರಿಸುವ ಕಡೇ ಎಚ್ಚರಿಕೆ ಈ ಬೆಂಡಿಗೇರಿ.

ಎಲ್ಲ ಜಾತಿಯ ಬಂಧುಗಳೇ, ಈಗ ಈ ಜಾತಿ ಕೂಪದಿಂದ ಎಲ್ಲ ಜಾತಿಗಳಿಗೂ ವಿಮೋಚನೆ ಆಗಬೇಕಿದೆ. ತಾವು ಮಾಡುವ ಕೆಲಸದ ಸರಿ ತಪ್ಪು ತಿಳಿಯುವ ವಿವೇಚನೆಯನ್ನೂ ಕಳೆದುಕೊಂಡಿರುವ ಮೇಲ್ಜಾತಿಗಳಿಗೆ, ದಲಿತರಿಗಿಂತ ಮೊದಲು ಇಂಥ ವಿಮೋಚನೆಯ ಅಗತ್ಯವಿದೆ.

ಅದಕ್ಕಾಗಿ ಬನ್ನಿ.

ಬೆಂಡಿಗೇರಿಯ ಊರ ದೊಡ್ಡವರಿಗೆ ಪಶ್ಚಾತ್ತಾಪ ಹುಟ್ಟಿಸಲು,

ಬೆಂಡಿಗೇರಿಯಲ್ಲಿ ಭಯದಿಂದ ಕುಗ್ಗಿರುವ ದಲಿತರಿಗೆ "ತಪ್ಪು ಮಾಡಿದವರು ನೀವಲ್ಲ, ನೀವು ಹೆದರಬೇಕಿಲ್ಲ" ಎಂದು ಧೈರ್ಯ ತುಂಬಲು,

"ಸರ್ಕಾರವೇ, ತಪ್ಪಿತಸ್ಥರನ್ನು ಶಿಕ್ಷಿಸಿ ಬೆಂಡಿಗೇರಿ ದಲಿತರಿಗೆ ಮಾನವಂತ ಬದುಕಿನ ಪುನರ್ವಸತಿ ಕಲ್ಪಿಸು" ಎಂದು ಒತ್ತಾಯಿಸಲು,

ನಾವೆಲ್ಲ ಸಹಸ್ರ ಸಂಖ್ಯೆಯಲ್ಲಿ ಜೊತೆಗೂಡೋಣ. ಮನುಕುಲಕ್ಕೆ ನಾಚಿಕೆ ಹುಟ್ಟಿಸಿರುವ ಈ ಭೀಕರ ಘಟನೆ ಬಗ್ಗೆ ಎಲ್ಲ ಹೃದಯಗಳಲ್ಲಿ ನಾಚಿಕೆ ಹುಟ್ಟಿಸಿ ಮಾನವತೆಯ ಅರಳಿಸೋಣ.

ಇದು ಕೇವಲ ದಲಿತರದಲ್ಲ. ಮಾನವ ಕುಲದ, ಮನುಷ್ಯತ್ವದ ಅಳಿವು ಉಳಿವಿನ ಪ್ರಶ್ನೆ.

**ಸರ್ಕಾರಕ್ಕೆ ನಮ್ಮ ಒತ್ತಾಯಗಳು :-**

1. ವಿಧಾನಮಂಡಲ ಸಮಿತಿಯ ಶಿಫಾರ್ಸುಗಳನ್ನು ಕೂಡಲೇ ಜಾರಿ ಮಾಡಿ.
2. ತಪ್ಪಿತಸ್ಥರನ್ನು ಸೇವೆಯಿಂದ ವಜಾ ಮಾಡಿ, ಗಡೀಪಾರು ಮಾಡಿ.
3. ಬೆಂಡಿಗೇರಿ ದಲಿತರಿಗೆ ಮಾನವಂತ ಪುನರ್ವಸತಿ ಕಲ್ಪಿಸಿ.

ಈ ಒತ್ತಾಯಗಳನ್ನು ಮುಂದಿಟ್ಟು ದ. ಸಂ. ಸ. ಬೆಳಗಾವಿ ಜಿಲ್ಲಾ ಶಾಖೆಯು ಈಗಾಗಲೇ ಮಾಡಿದ ಹೋರಾಟದ ಬಗ್ಗೆ ಸರ್ಕಾರವು ಅನುಸರಿಸಿದ ಕುರುಡು, ಕಿವುಡು ನೀತಿಯನ್ನು ಇನ್ನೂ ಮುಂದುವರೆಸಿದರೆ, ಈ ಸರ್ಕಾರವು ಕಣ್ಣು-ಕಿವಿ ತೆರೆಯುವವರೆಗೆ ನಮ್ಮ ಹೋರಾಟವನ್ನು ಮುಂದುವರಿಸುತ್ತೇವೆ. ○

5 ಸೆಂ. ಮೀ. ಮಾರ್ಜಿನ್ ಬಿಟ್ಟು ಕಂದವಾದ ಸ್ಪಷ್ಟ ಬರಹದಲ್ಲಿ ಬರೆದು ದಿನಾಂಕ 22-2-88ರೊಳಗೆ ನೆಹರು ಯುವ ಕೇಂದ್ರದ ಕಾರ್ಯಾಲಯಕ್ಕಾಗಲಿ [illegible] 27-2-88ರೊಳಗಾಗಿ ಅಂಚೆಯ ಮೂಲಕ ತಲುಪುವಂತೆ [illegible] ವಿವರಗಳನ್ನು ನೆಹರು ಯುವ ಕೇಂದ್ರದ ಸಂಯೋಜಕರಿಂದ ಪಡೆಯಬಹುದು.

## ನೂರು ಬಾವಿ ಯೋಜನೆ ಎಂದರೇನು ?

ಸರ್ಕಾರ ಸಣ್ಣ ರೈತರ ಜಮೀನಿಗೆ ನೀರಿನ ಕೊರತೆ ನೀಗಿಸುವ ಸಲುವಾಗಿ ಜಾರಿಗೆ ತಂದಿರುವ 'ನೂರು ಬಾವಿ ನೀರಾವರಿ ಯೋಜನೆ' ಬಗ್ಗೆ ಇಲ್ಲಿ ಕೆಲವು ಮಾಹಿತಿಗಳನ್ನು ಕೊಡಲಾಗಿದೆ.

ಈ ಯೋಜನೆಯನ್ವಯ ಸಣ್ಣ ಹಿಡುವಳಿದಾರರಿಗೆ ಬ್ಯಾಂಕುಗಳ ಮೂಲಕ ಸಾಲವನ್ನು ಒದಗಿಸಲಾಗುವುದು. ಇದರಲ್ಲಿ ಶೇ. 25 ಭಾಗ ಜಿಲ್ಲಾ ಪರಿಷತ್‌ನ (ಸರ್ಕಾರದ) ಸಹಾಯ ಧನವಾಗಿರುತ್ತದೆ. ಪರಿಶಿಷ್ಟ ಜಾತಿ/ವರ್ಗದ ರೈತರಿಗೆ ಶೇ. 50 ಭಾಗ ಸಹಾಯ ಧನವಿರುತ್ತದೆ. ಈ ಕೆಳಕಂಡ ಸಂದರ್ಭಗಳಲ್ಲಿ ಸಾಲ ಪಡೆಯಬಹುದು :

1) ಬಾವಿ ತೋಡಿಸಿ ಪಂಪ್ ಸೆಟ್ ಹಾಕಿಸಲು.

2) ಬಾವಿ, ಹಳ್ಳ, ನದಿ ಇತ್ಯಾದಿ ಯಾವುದೇ ಮೂಲದಿಂದ ನೀರು ಎತ್ತುವ ಸೌಕರ್ಯವಿರುವವರು ಪಂಪ್ ಸೆಟ್ ಹಾಕಿಸಲು.

3) ಬಾವಿ ಅಥವಾ ಪಂಪ್ ಸೆಟ್ ಇಲ್ಲದೆ, ಕೇವಲ ಹಳ್ಳ ಅಥವಾ ಇನ್ನಿತರ ಯಾವುದೇ ನೀರಿನ ಮೂಲಕ್ಕೆ ಆಣೆಕಟ್ಟು (ಪಿಕ್ ಅಪ್) ಕಟ್ಟಿ ಜಮೀನಿಗೆ ನೀರು ಹಾಯಿಸುವ ವ್ಯವಸ್ಥೆ ಮಾಡಿಕೊಳ್ಳಲು.

ಮಂಡಲ ಪಂಚಾಯ್ತಿ ಕಾರ್ಯದರ್ಶಿ ಮತ್ತು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಮೂಲಕ ಈ ಸಂಬಂಧವಾದ ರಿಕಾರ್ಡ್‌ಗಳನ್ನು ಬ್ಯಾಂಕಿಗೆ ಸಲ್ಲಿಸಬೇಕಾಗುತ್ತದೆ.

(ಮಾಹಿತಿ : ಗಣಪತಿ ಶಾಸ್ತ್ರಿ, ಕಾರ್ಯದರ್ಶಿ, ಹರಿಹರಪುರ ಮಂಡಲ ಪಂಚಾಯ್ತಿ.)

## ಅಂತರ ಜಾತಿ-ಸರಳ ವಿವಾಹ

ನ. ರಾ. ಪುರ: ಈ ತಾಲ್ಲೂಕಿನ ಗುಬ್ಬಿಗಾ ಗ್ರಾಮದ ವಗಡೆಕಲ್ ವಾಸಿ, ಕಿಸಾನ್ ಸಭಾ ಸದಸ್ಯರಾದ ಪರಿಶಿಷ್ಟ ಜಾತಿಗೆ ಸೇರಿದ ಎಂ. ಕೆ. ವೇಲಾಯುಧನ್ ಎಂಬವರು ಸಂಸೆ ಗ್ರಾಮದ ವೆಂಕಟಪ್ಪಗೌಡರ ಮಗಳಾದ ಜಯ ಎಂಬವರನ್ನು ಜ. 22ರಂದು ಕಿಸಾನ್ ಸಭಾದ ನ. ರಾ. ಪುರ ಶಾಖೆಯ ಕೆ. ಬಾಲಭಾಸ್ಕರ ಕರ್ತ, ಬಿ. ಟಿ. ಅಶ್ವಿನಿ ಮತ್ತು ವಾಸುದೇವ ಕೋಟ್ಯಾನ್ ಇವರ ಸಮ್ಮುಖದಲ್ಲಿ ನ. ರಾ. ಪುರ ಸಬ್ ರಿಜಿಸ್ಟ್ರಾರ್ ಕಛೇರಿಯಲ್ಲಿ ಸರಳ ವಿವಾಹವಾದರು.

ನೂತನ ದಂಪತಿಗಳಿಗೆ ನ. ರಾ. ಪುರ ಕಿಸಾನ್ ಸಭಾ ಶಾಖೆಯು ಹಾರ್ದಿಕ ಶುಭಾಶಯಗಳನ್ನು ಸಲ್ಲಿಸಿದೆ.

(ವರದಿ : ಬಿ. ಟಿ. ಅಶ್ವಿನಿ)

## ನ. ರಾ. ಪುರದಲ್ಲಿ ತ್ಯಾಗರಾಜ, ಪುರಂದರ ಆರಾಧನೆ

ಜ. 23, 24ರಂದು ನರಸಿಂಹರಾಜಪುರದ ಉಮಾಮಹೇಶ್ವರ ದೇವಸ್ಥಾನದಲ್ಲಿ ಪುರಂದರದಾಸರ ಹಾಗೂ ತ್ಯಾಗರಾಜರ ಆರಾಧನಾ ಮಹೋತ್ಸವವು ವಿಜೃಂಭಣೆಯಿಂದ ನಡೆಯಿತು.

ಮಧೂರು ಬಾಲಸುಬ್ರಮಣ್ಯಂ ಹಾಗೂ ಬಾಣಾವರದ ಗಮಕ ಕಲಾವಿದರಾದ ಸುಬ್ಬುಕೃಷ್ಣ ಮತ್ತು ಇವರ ಶಿಷ್ಯ ಗೋವಿಂದರಾಜ ಗುಪ್ತರ ದ್ವಂದ್ವ ಹಾಡುಗಾರಿಕೆ ಸೊಗಸಾಗಿತ್ತು. ಏಳು ವರ್ಷದ ಕುಮಾರಿ ಸುಮತಾಳ ಮೃದಂಗವಾದನ ಕಾರ್ಯಕ್ರಮದ ವಿಶೇಷ ಆಕರ್ಷಣೆಯಾಗಿತ್ತು

## ಜಿಲ್ಲೆಯ ಯುವಜನರಿಗಾಗಿ ಪ್ರಬಂಧ ಸ್ಪರ್ಧೆ : 'ಸ್ವಾತಂತ್ರ್ಯ ಚಳುವಳಿಯಲ್ಲಿ ನಮ್ಮ ಜಿಲ್ಲೆ ಪಾತ್ರ'

ಚಿಕ್ಕಮಗಳೂರು: ಇಲ್ಲಿನ ನೆಹರು ಯುವ ಕೇಂದ್ರವು ಮೇಲ್ಕಂಡ ವಿಷಯದ ಬಗ್ಗೆ ಜಿಲ್ಲೆಯ ಯುವ ಜನರಿಗಾಗಿ ಪ್ರಬಂಧ ಸ್ಪರ್ಧೆಯೊಂದನ್ನು ಏರ್ಪಡಿಸಿದೆ. ಪ್ರಬಂಧವು ಸಂಶೋಧನಾತ್ಮಕವಾಗಿದ್ದು, ಸಾವಿರ ಪದಗಳಿಗೆ ಮೀರದಂತಿರಬೇಕು. ಪ್ರಬಂಧವನ್ನು ಕನ್ನಡ/ಇಂಗ್ಲೀಷ್ ಅಥವಾ ಹಿಂದಿ ಭಾಷೆಯಲ್ಲಿ ಬರೆಯಬಹುದು. ಹಾಗೂ ಈ ಬರಹವು ಈ ಮೊದಲು ಯಾವುದೇ ಪತ್ರಿಕೆಗಳಲ್ಲಿ ಪ್ರಕಟವಾಗಿರಬಾರದು. ಬರವಣಿಗೆಗೆ ಬೇಕಾಗುವ ಮಾಹಿತಿಗಾಗಿ ಸ್ವಾತಂತ್ರ್ಯ ಹೋರಾಟಗಾರರನ್ನು, ಹಿರಿಯರನ್ನು ಸಂಪರ್ಕಿಸಬಹುದು.

ಈ ಸ್ಪರ್ಧೆಯನ್ನು ವಯೋಮಿತಿಗನುಸಾರವಾಗಿ (1) 15ರಿಂದ 18, (2) 19ರಿಂದ 25 ಮತ್ತು (3) 26ರಿಂದ 35 ಎಂದು ಮೂರು ವಿಭಾಗಗಳಲ್ಲಿ ನಡೆಸಲಾಗುವುದು. ವಯಸ್ಸಿನ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲಾ/ಕಾಲೇಜು ಮುಖ್ಯಸ್ಥರಿಂದ ಪಡೆದು ಪ್ರಬಂಧದೊಂದಿಗೆ ನೀಡಬೇಕು.

ಪ್ರತಿ ವಿಭಾಗದ ಎರಡು ಅತ್ಯುತ್ತಮ ಬರಹಗಾರರಿಗೆ ಪ್ರೇಕ್ಷಣೀಯ ಸ್ಥಳಗಳಾದ ಗೋವಾ, ಪುರಿ, ಅಲ್ಮೋರ, ಸಿಮ್ಲಾ, ಶ್ರೀನಗರ ಅಥವಾ ಕನ್ಯಾಕುಮಾರಿಯಲ್ಲಿ ನಡೆಯುವ ಮೂರು ದಿನಗಳ ಪ್ರವಾಸಿ ಶಿಬಿರಕ್ಕೆ ಇಲಾಖೆ ಖರ್ಚಿನಿಂದ ಕಳುಹಿಸಲಾಗುವುದು.

ಪ್ರಬಂಧವನ್ನು ನೀಡುವಾಗ ಹೆಸರು, ತಂದೆ ಹೆಸರು, ಸ್ವವಿಳಾಸದ ವಿವರಗಳನ್ನು ಪ್ರತ್ಯೇಕ ಹಾಳೆಯಲ್ಲಿ ಬರೆದು ಕೊಡಬೇಕು. ಪ್ರಬಂಧವನ್ನು ಫುಲ್‌ಸ್ಕೇಪ್ ಹಾಳೆಯಲ್ಲಿ

## ಗಿರಿಜನ ರೈತನಿಗೆ ಸನ್ಮಾನ

ಬಿಳಾಲ್‌ಕೊಪ್ಪ : ಇಲ್ಲಿನ ಕೃಷಿ ವಿಚಾರ ವಿನಿಮಯ ಕೇಂದ್ರ, ಮಹಿಳಾ ಸಮಾಜ, ಯುವತಿ ಮಂಡಳಿ ಮತ್ತು ಯುವಕ ಸಂಘ ಇವುಗಳ ಸಂಯುಕ್ತ ವಾರ್ಷಿಕೋತ್ಸವ ಜ. 31ರಂದು ಸಡಗರದೊಂದಿಗೆ ನೆರವೇರಿತು.

ಈ ಸಂದರ್ಭದಲ್ಲಿ, ಕಲ್ಲುಗುಡ್ಡೆಯ ಗಿರಿಜನ ರೈತ ಬಿ. ಕೆ. ಬೊಮ್ಮಯ್ಯ ಅವರಿಗೆ, ಸಾಲ ಸೌಲಭ್ಯಗಳನ್ನು ಸರಿಯಾಗಿ ಬಳಸಿಕೊಂಡು ಉತ್ತಮ ರೀತಿಯಲ್ಲಿ ಕೃಷಿ ಮಾಡುತ್ತಿರುವುದಕ್ಕಾಗಿ ಸಿಂಡಿಕೇಟ್ ಬ್ಯಾಂಕ್ ವತಿಯಿಂದ ಪ್ರಶಸ್ತಿ ಪತ್ರ ಮತ್ತು ಶಾಲು ಸಮೇತ 'ಅತ್ಯುತ್ತಮ ಯುವಕ ರೈತ' ಎಂಬ ಪ್ರಶಸ್ತಿ ನೀಡಲಾಯಿತು.

ವಾರ್ಷಿಕೋತ್ಸವಗಳ ಅಂಗವಾಗಿ ವಿವಿಧ ಸ್ಪರ್ಧೆಗಳು, ಚರ್ಚೆ, ಮನರಂಜನಾ ಕಾರ್ಯಕ್ರಮಗಳು ನಡೆದುವು.

### ಕೃತಜ್ಞತೆ

ತಾನು ಜಮೀನು ಮಾಡಲು ಎಲ್ಲ ನೆರವು ನೀಡಿದ ಜೆ. ಕೆ. ಶಿವಶಂಕರ್, ಕೆ. ಎಸ್. ಜನಾರ್ದನಯ್ಯ ಅವರಿಗೂ, ಕೊಪ್ಪ ತಾ॥ ಕಛೇರಿಗೆ 32 ತಿರುಗಾಟ ಮಾಡಿಯೂ ಕಾಫಿ ಪಿಆರ್‌ಸಿ ಪಡೆಯಲಾಗದಿದ್ದಾಗ ಅದನ್ನು ದೊರಕಿಸಿಕೊಟ್ಟ ಮಂಡಲ ಪ್ರಧಾನ ಬಿ. ಎನ್. ಭಾಸ್ಕರ್ ಅವರಿಗೂ, ಸಿಂಡಿಕೇಟ್ ಬ್ಯಾಂಕಿನ ಮ್ಯಾನೇಜರ್ ಮತ್ತು ಗ್ರಾ. ಅ. ಅಧಿಕಾರಿ ಹಾಗೂ ಕೃಷಿ ಮಾರ್ಗದರ್ಶಿ ಬಿ. ಎನ್. ವೆಂಕಟರಮಣ ಅವರುಗಳಿಗೂ ಬಿ. ಕೆ. ಬೊಮ್ಮಯ್ಯ ಕೃತಜ್ಞತೆ ಸಲ್ಲಿಸಿದ್ದಾರೆ.

## ಸೈಕಲ್ ಸ್ಪರ್ಧೆಯ ವಿಜೇತರು

ಬಿಳಾಲ್‌ಕೊಪ್ಪ: ಇಲ್ಲಿನ ಮೇರುತಿ ಜೇಸೀಸ್ ಆಶ್ರಯದಲ್ಲಿ ಗಣರಾಜ್ಯೋತ್ಸವದ ಅಂಗವಾಗಿ ನಡೆದ ಸೈಕಲ್ ಸ್ಪರ್ಧೆಯಲ್ಲಿ ಎ. ವಿಠಲ್, ಚಿತ್ತ್ರದಕೊಳಲು, ಕಂದಗಾರು ರತ್ನಾಕರ್, ಕೊಪ್ಪ ಮತ್ತು ಹೆಗ್ಗದ್ದೆ ಸತೀಶ್, ಜಯಪುರ ಇವರುಗಳು ಜಯಗಳಿಸಿದರು.

ಸ್ಪರ್ಧೆಗೆ ಸಹಕರಿಸಿದ ಪೋಲೀಸ್ ಇಲಾಖೆ ಬಸರೀಕಟ್ಟೆ ಪ್ರಾಥಮಿಕ ಆರೋಗ್ಯ ಘಟಕದ ವೈದ್ಯಾಧಿಕಾರಿಗಳು ಮತ್ತು ಸಿಬ್ಬಂದಿ ವರ್ಗ ಹಾಗೂ ಸಾರ್ವಜನಿಕರಿಗೆ ಜೇಸೀಸ್ ಅಧ್ಯಕ್ಷ ಜಗದೀಶ್ ಗಜ್ಜಿನಮನೆ ಕೃತಜ್ಞತೆ ಸಲ್ಲಿಸಿದ್ದಾರೆ.

## ಶಾಲೆಗೆ ಧ್ವಜಸ್ತಂಭ, ಆಟದ ಮೈದಾನ ಕೊಡುಗೆ

ಗುಡ್ಡೇತೋಟ : ಇಲ್ಲಿನ ಹಿ. ಪ್ರಾ. ಶಾಲೆಗೆ ಜಿ. ವಿ. ಗಣಪತಿ ರಾವ್ ಸಹೋದರರು ಶಾಶ್ವತ ಧ್ವಜ ಸ್ತಂಭವನ್ನೂ, ಭದ್ರಾ ಕಾಫಿ ಎಸ್ಟೇಟಿನವರು ಸುಮಾರು 10 ಸಾವಿರ ರೂ. ವೆಚ್ಚದಲ್ಲಿ, ದಿ॥ ಕೆ. ಸಿ. ಮಾಮನ್ ರವರ ನಾಮಾಂಕಿತದಲ್ಲಿ ಆಟದ ಮೈದಾನವನ್ನೂ ನಿರ್ಮಿಸಿ ಕೊಟ್ಟಿದ್ದಾರೆ.

ಜ. 27 ರಂದು ಬಿ. ಜಿ. ಚಿದಂಬರ್ ಅಧ್ಯಕ್ಷತೆಯಲ್ಲಿ ನಡೆದ ಶಾಲಾ ವಾರ್ಷಿಕೋತ್ಸವದಂದು ಧ್ವಜ ಸ್ತಂಭವನ್ನು ಶಾಲೆಗೆ ಅರ್ಪಿಸಲಾಯಿತು.

ಶಾಲಾ ಮುಖ್ಯೋಪಾಧ್ಯಾಯರಾದ ಬಿ. ಜಿ. ಮಹಾದೇವಯ್ಯ ಅವರನ್ನು ಗ್ರಾಮಸ್ಥರು ಸನ್ಮಾನ ಪತ್ರ ಅರ್ಪಿಸಿ ಗೌರವಿಸಿದರು.

(ವರದಿ : ಜಿ. ಸುಬ್ಬರಾವ್)



ಚಂದಾ ಹಣ ಕಳಿಸಿ ಸಹಕರಿಸಿ
ವಾರ್ಷಿಕ ಚಂದಾ 25 ರೂ.

### ಅಡಿಕೆ ಧಾರಣೆ

ಶಿವಮೊಗ್ಗ 5-2-1988
ಸರಕು : 3500 – 4270
ಬೆಟ್ಟೆ : 2200 – 2720
ಗೊರಬಲು : 800 – 1159

ಸಾಗರ 4-2-1988
ಇಡಿ : 1821 – 2269
ಆಪಿ : 3500 – 4500
ಚಾಲಿ : 1120 – 1435
ಸಿಪ್ಪೆಗೋಟು : 279 – 590

### ಏಲಕ್ಕಿ ಧಾರಣೆ

ಸಕಲೇಶಪುರ 3.2.1988
ಸರಾಸರಿ : 144 - 149

ಮಂಗಳೂರು 5.2.1988
ಏಲಕ್ಕಿ : 130 – 150
ಕಾಳು ಮೆಣಸು : 4600



ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಕೊಪ್ಪ ವಿಭಾಗ ಕೊಪ್ಪ.

# ಪ್ರಕಟಣೆ

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಅರಣ್ಯ ಸಂಪತ್ತು ದಿನೇ ದಿನೇ ಹಲವಾರು ಕಾರಣಗಳಿಂದಾಗಿ ಕ್ಷೀಣಿಸುತ್ತಿದೆ. ಅರಣ್ಯ ಸಂಪತ್ತು ಕ್ಷೀಣಿಸಲು ಕಾಡಿನ ಬೆಂಕಿಯು ಒಂದು ಪ್ರಧಾನ ಕಾರಣ. ಕಾಡಿನ ಬೆಂಕಿಯಿಂದಾಗಿ, ಬೆಳವಣಿಗೆಯಲ್ಲಿರುವ ಮರಗಳು ಹಾಗೂ ಲಕ್ಷೋಪಲಕ್ಷ ಪುಟ್ಟ ಗಿಡಗಳು ಕಮರಿಹೋಗುವುದರೊಂದಿಗೆ, ಬೆಲೆ ಬಾಳುವ ಒಣಗಿದ ಮರಗಳು ಸುಟ್ಟು ಹೋಗುತ್ತವೆ. ಇದಲ್ಲದೆ ಕಾಡಿನಲ್ಲಿ ದೊರೆಯುವ ಹಲವು ಬಗೆಯ ಬೀಜಗಳು, ಜೇನು, ಸೊಪ್ಪು, ಗಿಡಮೂಲಿಕೆಗಳೆಲ್ಲ ನಶಿಸಿ ಹೋಗುತ್ತವೆ. ಈ ರೀತಿಯ ನಾಶವನ್ನು ಮುಂದುವರಿಯಲು ಬಿಟ್ಟಲ್ಲಿ ಅರಣ್ಯ ಸಂಪತ್ತನ್ನು ಉಳಿಸುವುದು ಮತ್ತು ಬೆಳೆಸುವುದು ಕಷ್ಟವಾಗುತ್ತದೆ. ಇದರೊಂದಿಗೆ ನಾವು ಕೂಡ ವಿನಾಶದತ್ತ ಸಾಗಬೇಕಾಗುತ್ತದೆ. ಎಲ್ಲೆಡೆಯೂ ಹಬ್ಬಿರುವ ಅರಣ್ಯವನ್ನು ಸರ್ಕಾರದ ಕಾರ್ಯಕ್ರಮಗಳಿಂದಲೇ ನಾಶದ ದವಡೆಯಿಂದ ತಪ್ಪಿಸಲು ಸಾಧ್ಯವಾಗದು. ಇದಕ್ಕೆ ನಾಡಿನ ಎಲ್ಲಾ ಜನರು ಕಾಡಿನ ಬಗ್ಗೆ ಚಿಂತಿಸಿ ತಮ್ಮ ಸುತ್ತಮುತ್ತಲಿನ ಅರಣ್ಯ, ಕಾಡ್ಗಿಚ್ಚಿಗೆ ಬಲಿಯಾಗದಂತೆ ನೋಡಿಕೊಂಡಲ್ಲಿ, ಅರಣ್ಯವನ್ನು ಉಳಿಸಲು ಸಾಧ್ಯ, ಬೆಳೆಸಲೂ ಸಾಧ್ಯ.

ಆದುದರಿಂದ, ಸಾರ್ವಜನಿಕರಲ್ಲಿ ವಿನಂತಿಸುವುದೇನೆಂದರೆ, ಯಾವ ಕಾರಣಕ್ಕೂ ಕಾಡಿಗೆ ಬೆಂಕಿಯನ್ನು ಹಚ್ಚಬೇಡಿ. ಕಾಡಿನ ಬೆಂಕಿ ಕಂಡಲ್ಲಿ, ಅದನ್ನು ಆರಿಸಲು ಸ್ವಪ್ರೇರಣೆಯಿಂದ ಮುಂದಾಗಿ ಆಗುವ ನಾಶವನ್ನು ತಪ್ಪಿಸಿರಿ. ಬೆಂಕಿ ದೊಡ್ಡ ಪ್ರಮಾಣದಲ್ಲಿದ್ದರೆ, ಹತ್ತಿರದ ಅರಣ್ಯ ಸಿಬ್ಬಂದಿಗಳಿಗೆ ತಿಳಿಸಿ, ಅಂತಹ ಅನಾಹುತವನ್ನು ತಪ್ಪಿಸಲು ಸಹಕರಿಸಿ. ಕಾಫಿ ಬೆಳೆಗಾರರು ತಮ್ಮ ಪಕ್ಕದ ಅರಣ್ಯ ಜಮೀನಿಗೆ ಬೆಂಕಿಯನ್ನು ಹಚ್ಚಬೇಡಿರಿ. ಲೋಕೋಪಯೋಗಿ ಇಲಾಖೆಯ ರಸ್ತೆ ಕಾರ್ಮಿಕರು, ರಸ್ತೆ ಕೆಲಸ ನಡೆಯುವಾಗ ಬೆಂಕಿ ರಸ್ತೆಯ ಪಕ್ಕದ ಅರಣ್ಯಕ್ಕೆ ತಗಲದಂತೆ ನೋಡಿಕೊಳ್ಳಿರಿ.

ಸ್ಥಳೀಯ ಮಂಡಲ ಪಂಚಾಯ್ತಿಗಳು ಅಥವಾ ಗ್ರಾಮಸ್ಥರು ತಮ್ಮ ಪಂಚಾಯ್ತಿ ಗ್ರಾಮಗಳ ವ್ಯಾಪ್ತಿಯಲ್ಲಿರುವ ಎಲ್ಲಾ ಸರ್ಕಾರಿ ಕಾಡನ್ನು ಬೆಂಕಿಯಿಂದ ಸಂಪೂರ್ಣ ರಕ್ಷಿಸುವ ಬಗ್ಗೆ ಕ್ರಮ ಕೈಗೊಂಡಲ್ಲಿ, ಕಾಡ್ಗಿಚ್ಚನ್ನು ಪರಿಣಾಮಕಾರಿಯಾಗಿ ತಡೆಗಟ್ಟಬಹುದು. ತಮ್ಮ ವ್ಯಾಪ್ತಿಯ ಗ್ರಾಮಸ್ಥರಿಗೆ ಬೆಂಕಿಯಿಂದಾಗುವ ಪ್ರತ್ಯಕ್ಷ ಅನಾಹುತಗಳ ಬಗ್ಗೆ ತಿಳುವಳಿಕೆ ನೀಡಿ, ನಾವು ಬದುಕಿ ಉಳಿಯಲು ಕಾಡುಳಿಯಬೇಕು ಎಂಬ ಪ್ರಜ್ಞೆಯನ್ನು ಜನರಲ್ಲಿ ಮೂಡಿಸಿದರೆ, ಬೆಂಕಿ ತಡೆ ಕಾರ್ಯವನ್ನು ಯಶಸ್ವಿಯಾಗಿ ಸಾಧಿಸಬಹುದು.

ಬಹೂಪಯೋಗಿ ಅರಣ್ಯ ಸಂಪತ್ತು ಪ್ರತಿ ವರ್ಷ ಕಾಡ್ಗಿಚ್ಚಿನಿಂದ ನಾಶಗೊಳ್ಳುವುದನ್ನು ತಡೆಗಟ್ಟಲು ನಿಮ್ಮ ಕೈಲಾದ ಎಲ್ಲಾ ಸಹಕಾರ ನೀಡಿರಿ.

**"ಕಾಡನ್ನು ಉಳಿಸಿ, ಬೆಳೆಸುವುದನ್ನು ನಿರ್ಲಕ್ಷಿಸಿದರೆ ವಿನಾಶ ಖಚಿತ"**

**"ನಾಡಿನ ಉಳಿವಿಗಾಗಿ ಕಾಡನ್ನು ರಕ್ಷಿಸಿ"**

**" ನೆ ನ ಪಿ ರ ಲಿ "**

ಕಾಡಿಗೆ ಬೆಂಕಿ ಹಚ್ಚುವುದು ಮಹಾಪರಾಧ. ಕಾಡಿಗೆ ಬೆಂಕಿ ಹಚ್ಚುವ ಅಥವಾ ಬೆಂಕಿ ಹಚ್ಚಲು ಪ್ರೇರೇಪಿಸುವ ವ್ಯಕ್ತಿಗಳನ್ನು ಕಾನೂನಿನ ಪ್ರಕಾರ ಕಠಿಣ ಶಿಕ್ಷೆಗೆ ಗುರಿಪಡಿಸಲಾಗುವುದು.

ಕಿಶನ್ ಸಿಂಗ್ ಸುಗಾರ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೊಪ್ಪ ಅರಣ್ಯ ವಿಭಾಗ, ಕೊಪ್ಪ

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ